ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ರಾಜ್ಯದ ಒಳಾಡಳಿತ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಗಳ ಕುರಿತು

ಶ್ರೀ ಹೆಚ್.ಎಂ. ರಮೇಶ್ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು) :-

375(412) ಮಾನ್ಯ ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಒಳಾಡಳಿತ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖೆ, ನಿಗಮ ಮತ್ತು ಮಂಡಳಿಗಳು ಯಾವುವು; (ಅವುಗಳ ಪೂರ್ಣ ವಿವರಗಳನ್ನು ನೀಡುವುದು)

(ಆ) ಕಳೆದ ಐದು ವರ್ಷಗಳಲ್ಲಿ ಒಳಾಡಳಿತ ಇಲಾಖೆಯ ಅನುದಾನದ ಬೇಡಿಕೆ ಎಷ್ಟು; ಐದು ವರ್ಷದ ಆಯವ್ಯಯದಲ್ಲಿ ಒಳಾಡಳಿತ ಇಲಾಖೆಗೆ ನಿಗದಿಗೊಳಿಸಿದ, ಬಿಡುಗಡೆಗೊಳಿಸಿದ, ಖರ್ಚು ಮಾಡಿದ ಮತ್ತು ಉಳಿಕೆಯಾದ ಅನುದಾನ ಎಷ್ಟು; (ವರ್ಷವಾರು ಹಾಗೂ ಒಳಾಡಳಿತ ಇಲಾಖೆಯ ಅಧೀನದಲ್ಲಿರುವ ಇಲಾಖೆ, ನಿಗಮ ಮಂಡಳಿವಾರು ಸಂಕ್ಷಿಪ್ತ ವಿವರ ನೀಡುವುದು)

(ಇ) ಆಯವ್ಯಯದಲ್ಲಿ ನೀಡಲಾದ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳಲಾಗಿದೆಯೇ; (ವರ್ಷವಾರು, ಇಲಾಖೆ, ನಿಗಮ ಮತ್ತು ಮಂಡಳಿವಾರು ವಿವರ ನೀಡುವುದು)

(ಈ) ಹಾಗಿಲ್ಲದಿದ್ದಲ್ಲಿ, ಅನುದಾನವನ್ನು ಬಳಸಿಕೊಳ್ಳದೇ ಇರಲು ಕಾರಣಗಳೇನು; (ವರ್ಷವಾರು, ಇಲಾಖೆ, ನಿಗಮ ಮತ್ತು ಮಂಡಳಿವಾರು ವಿವರ ನೀಡುವುದು)

(ಉ) ಆಯವ್ಯಯದಲ್ಲಿ ನೀಡಲಾದ ಅನುದಾನದಲ್ಲಿ ಉಳಿಕೆಯಾದ ಅನುದಾನವನ್ನು ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದಲ್ಲಿ ನಿಗದಿ ಠೇವಣಿ (ಫಿಕ್ಸೆಡ್ ಡಿಪಾಸಿಟ್) ರೂಪದಲ್ಲಿ ಇಡಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಳೆದ ಐದು ವರ್ಷಗಳಿಂದ ಎಷ್ಟು ಮೊತ್ತವನ್ನು ಯಾವ ಯಾವ ಇಲಾಖೆ, ನಿಗಮ, ಮಂಡಳಿಗಳು, ಠೇವಣಿ ರೂಪದಲ್ಲಿ ಇಡಲಾಗಿದೆ; (ವಿವರಗಳನ್ನು ವರ್ಷವಾರು ನೀಡುವುದು)

(ಊ) ಹಾಗಿದ್ದಲ್ಲಿ, ಇಲಾಖೆ ನಿಗಮ ಮಂಡಳಿಗಳು ಠೇವಣಿ ರೂಪದಲ್ಲಿ ಅನುದಾನವನ್ನು ಇಡಲು ಕಾರಣಗಳೇನು; ಅದನ್ನು ಯಾವ ಉದ್ದೇಶಗಳಿಗೆ ಬಳಸಿಕೊಳ್ಳಲಾಗುತ್ತಿದೆ ? (ವಿವರ ನೀಡುವುದು)